# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | **2390** |
| **ಸದಸ್ಯರ ಹೆಸರು** | **ಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)** |
| **ಉತ್ತರಿಸಬೇಕಾದ ದಿನಾಂಕ** | **29.03.2021** |
| **ಉತ್ತರಿಸಬೇಕಾದ ಸಚಿವರು** | **ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ)** |
| **ಪ್ರಶ್ನೆ** | **ಉತ್ತರ** |
| ಅ) ಮಾನ್ಯ ಮುಖ್ಯಮಂತ್ರಿಗಳು 2021-22ನೇ ಸಾಲಿನ ಮುಂಗಡ ಪತ್ರದಲ್ಲಿ Super Computing and Quantum Computing ಅಡಿಯಲ್ಲಿ Quantum Computing ಮತ್ತು ಸಂಬಂಧಿತ ತಂತ್ರಜ್ಞಾನ ಹೆಚ್ಚಿಸಲು ರಾಜ್ಯದಲ್ಲಿ ಒಂದು ಸಂಶೋಧನಾ ಪಾರ್ಕ್ ಸ್ಥಾಪಿಸುವುದಾಗಿ ಘೋಷಿಸಿರುವುದು ನಿಜವೇ; | ಹೌದು.<br><br>2021-22ರ ಆರ್ಥಿಕ ವರ್ಷದಲ್ಲಿ ಘೋಷಿಸಲಾಗಿರುವ ಆಯವ್ಯಯ ಕಂಡಿಕೆ ಸಂಖ್ಯೆ 235ಯು ಈ ಕೆಳಕಂಡಂತಿದೆ:<br><br>*"ಕ್ವಾಂಟಂ ಕಂಪ್ಯೂಟಿಂಗ್ ಮತ್ತು ಸಂಬಂಧಿತ ತಂತ್ರಜ್ಞಾನಗಳ ಸಂಶೋಧನೆ ಉತ್ತೇಜಿಸಲು 10 ಕೋಟಿ ರೂ.ಗಳ ವೆಚ್ಚದಲ್ಲಿ 'ಸಂಶೋಧನಾ ಪಾರ್ಕ್' ಅನ್ನು ಸ್ಥಾಪಿಸಲಾಗುವುದು. ಇದರಿಂದ ರಾಜ್ಯದಲ್ಲಿ ಕ್ವಾಂಟಂ ಕಂಪ್ಯೂಟಿಂಗ್ ಕ್ಷೇತ್ರದಲ್ಲಿ ವೈಜ್ಞಾನಿಕ ಆವಿಷ್ಕಾರಗಳು ಹಾಗೂ ನಾವೀನ್ಯತೆಯನ್ನು ಪ್ರಚೋದಿಸಲು ಸಹಕಾರಿಯಾಗುವುದು."* |
| ಆ) ಹಾಗಿದ್ದಲ್ಲಿ, ಈ ಯೋಜನೆ ರೂಪು-ರೇಷೆಗಳನ್ನು ಮತ್ತು ಈ ಯೋಜನೆಗೆ ನಿಗದಿಪಡಿಸಿರುವ ಹಣವೆಷ್ಟು; (ಸಂಪೂರ್ಣ ವಿವರ ನೀಡುವುದು) | ಈ ನಿಟ್ಟಿನಲ್ಲಿ, ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆ (IISc.)ಯಲ್ಲಿರುವ ಹಾಗೂ ಇನ್ನಿತರ ಕ್ಷೇತ್ರ ತಜ್ಞರುಗಳೊಂದಿಗೆ ಸಮಾಲೋಚನೆ ನಡೆಸಿ ವಿವರವಾದ ಪ್ರಸ್ತಾವನೆಯನ್ನು ರಚಿಸಲಾಗುತ್ತಿದೆ. |
| ಇ) ಕೇಂದ್ರ ಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಿಂದ ಆರ್ಥಿಕ ನೆರವು ನೀಡುವಂತೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದೆಯೇ? (ಸಂಪೂರ್ಣ ವಿವರ ನೀಡುವುದು) | ವಿವರವಾದ ಯೋಜನೆಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ, ಕೇಂದ್ರ ಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯಿಂದ ಆರ್ಥಿಕ ನೆರವು ನೀಡಲು ಕೋರುವ ಬಗ್ಗೆ ಸೂಕ್ತ ನಿರ್ಣಯವನ್ನು ಕೈಗೊಳ್ಳಲಾಗುತ್ತದೆ. |

**(ಐಟಿಬಿಟಿ 32 ಎಲ್‌ಸಿಎಂ 2021)**

**(ಡಾ. ಅಶ್ವಥ್ ನಾರಾಯಣ ಸಿ. ಎನ್.)**
ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ
ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು.